# ಬಾನಯ್ಯ ಗರುಡಾದ್ರಿ

# BANAIAH GARUDADRI



ಕರ್ನಾಟಕ ಲಲಿತಕಲಾ ಅಕಾಡೆಮಿ

Karnataka Lalithakala Academy



ಬಸವರಾಜ ಉಪ್ಪಿನ ಜನಿಸಿದ್ದು ೧೯೪೫ರಲ್ಲಿ. ಲಲಿತಕಲೆಯಲ್ಲಿ ಡಿಪ್ಲೊಮಾವನ್ನು ೧೯೬೯ರಲ್ಲಿ ಹಾಗೂ ಆರ್ಟ್ ಮಾಸ್ಟರ್ ಡಿಪ್ಲೊಮಾವನ್ನು ೧೯೭೬ರಲ್ಲಿ ಪಡೆದಿದ್ದಾರೆ. ರಾಜ್ಯದ ಅನೇಕ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿರುವ ಶ್ರೀಯುತರು ಬೆಂಗಳೂರು, ಗುಲ್ಬರ್ಗಾಗಳಲ್ಲಿ ತಮ್ಮ ಕಲಾಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಗಾಗಿ ಶ್ರವಣಬೆಳಗೊಳದ ಭಿತ್ತಿಚಿತ್ರಗಳನ್ನು ನಕಲು ಮಾಡಿಕೊಟ್ಟಿದ್ದಾರೆ ಅಲ್ಲದೆ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿರುವ ಶ್ರೀಯುತರು ಗುಲ್ಬರ್ಗಾದಲ್ಲಿ ನಡೆಯುವ ಕಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಪ್ರಸ್ತುತ ಗುಲಬರ್ಗಾ ಕಾಲೇಜಿನಲ್ಲಿ ಕಲಾ ಶಿಕ್ಷಕರಾಗಿದ್ದು ಪಠ್ಯಪುಸ್ತಕ ಮಂಡಲಿಯಲ್ಲಿ ಕಲಾವಿದರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಕರ್ನಾಟಕ ಕಲಾವಿದರು - 36

# ಬಾನಯ್ಯ ಗರುಡಾದ್ರಿ




ಬಸವರಾಜ ಉಪ್ಪಿನ

ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು - ೫೬೦ ೦೦೨

BANAIAH GARUDADRI : A biography by Basavaraj Uppin, Published by K. Mukundan, Registrar, Karnataka Lalithakala Academy, Nrupatunga Road, Bangalore - 560 002.

Translated by : **M. L. Manjunatha**

First Impression : 1995.

Copies : 1000

Price : Rs. : 10-00

ಪ್ರಧಾನ ಸಂಪಾದಕರು:

ಪಿ. ಆರ್. ತಿಪ್ಪೇಸ್ವಾಮಿ

ಪ್ರಕಟಣಾ ಸಲಹಾ ಸಮಿತಿ:

ವಿ. ಟಿ. ಕಾಳೆ.

ಶ್ರೀಮತಿ ಎಸ್. ಧನಲಕ್ಷ್ಮಿ

ಡಾ. ಬಿ. ಕೆ. ಹಿರೇಮಠ

ರಘುಪತಿ ಭಟ್

ವೈ. ಹೆಚ್. ಸೂಗೂರ್

Printed at : ILA Printers, 153, 4th Main, 8th Cross, Chamarajpet,
Bangalore - 560 018. Phone : 623159.

# ಅಧ್ಯಕ್ಷರ ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಿರುವುದು ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ತಿಳುವಳಿಕೆ ಉಂಟು ಮಾಡಲು ಸಹಾಯವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಮೂವತ್ತೈದು ಸಚಿತ್ರ ಸುಂದರ ಹೊತ್ತಿಗೆಗಳು ಹೊರಬಂದಿವೆ. ಈಗ ಅಂದರೆ ೧೯೯೪- ೯೫ರ ಸಾಲಿನಲ್ಲಿ ಹಲವಾರು ಹೊತ್ತಿಗೆಗಳು ಹೊರಬಂದಿದ್ದು, ಈಗಾಗಲೇ ಕೆಲವು ಪುಸ್ತಕಗಳು ಪುನರ್ ಮುದ್ರಣವಾಗಿರುವುದು, ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನದ ಬಗ್ಗೆ ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳೂ, ಆಯಾ ಕಲಾವಿದರ, ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ, ಅವರ ಕಾಲದ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾ ರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

ಪಿ. ಆರ್. ತಿಪ್ಪೇಸ್ವಾಮಿ
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು




# ಬಾನಯ್ಯ ಗರುಡಾದ್ರಿ

## ಗರುಡಾದ್ರಿ ಮನೆತನ

ಸುಮಾರು ಹತ್ತು - ಹದಿನೈದು ತಲೆಮಾರಿನ ಅರಸರು ಸುರಪುರ ಪ್ರದೇಶವನ್ನು ದಕ್ಷ ರೀತಿಯಿಂದ ಆಳಿದ್ದರು ಎಂಬ ಮಾತು ನಮಗೆ ಇತಿಹಾಸದ ಪುಟಗಳಿಂದ ವಿದಿತವಾಗುತ್ತದೆ. ಅದರಲ್ಲೂ ಸುರಪುರ ಸಂಸ್ಥಾನ ರೂಪುಗೊಂಡ ನಂತರ, 'ರಾಜಾ ಇಮ್ಮಡಿ ವೆಂಕಟಪ್ಪ ನಾಯಕ' (1773 - 1802) ಅವರಿಂದ ಮೊದಲುಗೊಂಡು ಕೊನೆಯ 'ರಾಜಾ ನಾಲ್ವಡಿ ವೆಂಕಟಪ್ಪ ನಾಯಕ' (1842 - 1858) ಅವರ ವರೆಗನ ಅವಧಿಯು ಅಂದರೆ ಸುಮಾರು ಈ ನೂರು ವರ್ಷದ ಅವಧಿಯು ಸುವರ್ಣ ಯುಗವಾಗಿ ರೂಪುಗೊಂಡಿತ್ತು. ಇವರ ಕಾಲಾವಧಿಯಲ್ಲಿಯೇ ಗರುಡಾದ್ರಿ ಮನೆತನದವರು, ಮೂಲ ಆಂಧ್ರದಿಂದ ಸುರಪುರಕ್ಕೆ ಆಗಮಿಸಿದ್ದರು ಎಂಬುದು ದಾಖಲೆಗಳಿಂದ ತಿಳಿದು ಬರುತ್ತದೆ. ಇಲ್ಲಿಗೆ ಆಗಮಿಸಿದ ಈ ಮನೆತನದ ಮೂಲಪುರುಷ ಚಿಟಿವೇಲಯ್ಯ. ಈತನ ಮಗ ಬೆನಕಯ್ಯ ಮತ್ತು ಬೆನಕಯ್ಯನ ಹಿರಿಯ ಮಗನೇ ಪ್ರಸಿದ್ಧ ಕಲಾವಿದ 'ಮೊದಲ ಬಾನಯ್ಯ ಗರುಡಾದ್ರಿ'.

ಕಲಾವಿದ ಮೊದಲ ಬಾನಯ್ಯನಿಗೆ ಮೂರುಜನ ಗಂಡು ಮಕ್ಕಳು ಕಮಲಯ್ಯ ವೆಂಕಯ್ಯ ಮತ್ತು ಶೇಷಯ್ಯ. ಕಮಲಯ್ಯನ ಮಗ ಎರಡನೆಯ ಬಾನಯ್ಯನೂ ಕಲಾವಿದನಾಗಿದ್ದು ಭಾರತದ ಮೊದಲ ರಾಷ್ಟ್ರಪತಿ ಡಾ. ಬಾಬುರಾಜೇಂದ್ರ ಪ್ರಸಾದ ಅವರಿಂದ 1967 ರಲ್ಲಿ ಮರಣೋತ್ತರ 'ರಾಷ್ಟ್ರ ಪ್ರಶಸ್ತಿಯನ್ನು' ಪತ್ನಿ ಶ್ರೀಮತಿ ನರಸಮ್ಮನು ಸ್ವೀಕರಿಸಿರುವ ವಿಷಯವು "ಸಗರನಾಡು ದರ್ಶನ" ಗ್ರಂಥದಲ್ಲಿ ಉಲ್ಲೇಖಸಲಾಗಿದೆ. ಕೊನೆಯಲ್ಲಿ ಇತ್ತೀಚೆಗೆ ಅಂದರೆ 1972ರ ಸುಮಾರಿಗೆ ಈ

ಮನೆತನದ . ವಾರಸುದಾರರು ತಾವಿರುವ ಮನೆಯನ್ನು ಹೊಸದಾಗಿ ನಿರ್ಮಿಸುತ್ತಿರುವುದನ್ನು ಅರ್ಧಕ್ಕೆ ನಿಲ್ಲಿಸಿ, ಆಂಧ್ರದ ಅಡೋನಿಯಲ್ಲಿ ಮತ್ತು ಹೈದರಾಬಾದಿನಲ್ಲಿ ವಾಸವಾಗಿರುವರು. ಇವರ ಇತರ ಸಂಬಂಧಿಕರನೇಕರು ಮಾತ್ರ ಸುರಪುರದಲ್ಲಿಯೂ ಮತ್ತು ಸುತ್ತ ಮುತ್ತಲ ಹಳ್ಳಿಗಳಲ್ಲಿಯೇ ವಾಸವಾಗಿದ್ದಾರೆ.

ಈ ಕಲಾವಿದ ಮನೆತನದವರು ಆಸ್ಥಾನ ಕಲಾವಿದರಾಗಿರುವುದರ ಜೊತೆಗೆ ಇಲ್ಲಿನ ಪ್ರಸಿದ್ಧ ದೇವಾಲಯ, ಅರಸರ ಇಷ್ಟ ದೇವರು ಶ್ರೀವೇಣುಗೋಪಾಲ ಸ್ವಾಮಿ ದೇವಾಲಯದ ಅರ್ಚಕರು ಮತ್ತು ಮೇಲ್ವಿಚಾರಕರಾಗಿದ್ದರು. ಅದಕ್ಕೆ ಅರಸರಿಂದ ಉಂಬಳಿಯಾಗಿ ಸುಮಾರು ಇನ್ನೂರು ಎಕರೆ ಭೂಮಿಯನ್ನು ತೆಗ್ಗಳ್ಳಿ - ಶಾಖಾಪುರ ಮತ್ತು ಶಹಪುರ ತಾಲ್ಲೂಕಿನ ಮುಡಬೂಳ ಗ್ರಾಮದಲ್ಲಿ ಹೊಂದಿದ್ದರು. ಆ ಎಲ್ಲ ಜಮೀನುಗಳನ್ನು ಮಾರಾಟ ಮಾಡಿಕೊಂಡು ಹೋಗಿರುವುದರಿಂದ ಇಂದು ಆ ಭೂಮಿಗಳು ಗರುಡಾದ್ರಿ ಜಮೀನುಗಳು ಎಂದೇ ಕರೆಯಿಸಿಕೊಳ್ಳುತ್ತಿವೆ.

## ಬಾನಯ್ಯ ಗರುಡಾದ್ರಿ

ಸುರಪುರವನ್ನು ಸಂದರ್ಶಿಸಿ ಅಲ್ಲಿ ದೊರೆಯುವ ವರ್ಣ ಚಿತ್ರಗಳನ್ನು ಕಂಡು 'ಇವು ಯಾರು ಬಿಡಿಸಿದವು?' ಎಂದು ಕೇಳಲು ಎಲ್ಲರ ಬಾಯಿಯಿಂದಲೂ 'ಕಲಾವಿದ ಬಾನಯ್ಯ ಗರುಡಾದ್ರಿ ಬಿಡಿಸಿದವು' ಎಂಬ ಏಕಮಾತ್ರ ಉತ್ತರ ದೊರೆಯುತ್ತದೆ. ಜೊತೆಗೆ ಅವರ ಮನೆಯವರೆಲ್ಲರೂ ಕಲಾವಿದರಾಗಿದ್ದು, ಒಂದು ಚಿತ್ರ ರಚಿಸುವಲ್ಲಿ ಬಾನಯ್ಯನಿಗೆ ಎಲ್ಲರೂ ಸಹಕರಿಸುತ್ತಿದ್ದರು ಎಂಬ ವಿಷಯ ತಿಳಿದುಬರುತ್ತದೆ. ಇಂದಿಗೆ ಸುಮಾರು ನೂರು ವರ್ಷಗಳ ಹಿಂದೆ ರಚಿತವಾದ ಬಹುಪಾಲು ಚಿತ್ರಗಳು ಕಲಾವಿದ ಬಾನಯ್ಯ ಗರುಡಾದ್ರಿ ಚಿತ್ರಿಸಿದವು. ಅವುಗಳ ಮೇಲೆ ಬಾನಯ್ಯನ ಹೆಸರು ಬರೆಯದೇ ಇದ್ದರೂ, ಅವುಗಳಲ್ಲಿ 'ಬಾನಯ್ಯ ನೋರ್ವನೆ ಹೆಚ್ಚಿನ ಚಿತ್ರಗಳನ್ನು ಬಿಡಿಸಿದ್ದನು ಎನ್ನುವ ಮಾತಿಗೆ ಬೇರೆ ಅಭಿಪ್ರಾಯವಿಲ್ಲ. ಆತನ ಮಗ ಕಲಾವಿದ ಕಮಲಯ್ಯನು ತನ್ನ ಚಿತ್ರಗಳಿಗೆ --

'ಕಮಲಯ್ಯ' ಎಂಬ ಅಂಕಿತ ಹಾಕಿರುವ ಕೆಲವು ಚಿತ್ರಗಳು ನಮಗೆ ನೋಡಲು ದೊರೆಯುತ್ತವೆ. ಇನ್ನೂ ಕೆಲವು ಚಿತ್ರಗಳ ರೇಖಾ ವಿನ್ಯಾಸಗಳನ್ನು ನೋಡಲು ಅವು ಬಾನಯ್ಯನ ಹೊರತು ಇತರರು ಬರೆದಿರಬೇಕು ಎಂದು ಬೇರ್ಪಡಿಸಬಹುದು.

ಹೀಗೆ ಸುಮಾರು ನೂರು ವರ್ಷಗಳ ಹಿಂದೆ ಬಿಡಿಸಿದ ಚಿತ್ರಗಳ ರಾಶಿಯ ಪೈಕಿ ಈಗ ನಮಗೆ ನೋಡಲು ಅತ್ಯಂತ ಕಡಿಮೆ ಚಿತ್ರಗಳು ದೊರೆಯುತ್ತವೆ. ನಾಲ್ಕು ಅಂಗುಲ ಮತ್ತು ಆರು ಅಂಗುಲದಿಂದ ಮೊದಲುಗೊಂಡು ಇಂಪೀರೀಯಲ್ ಅಳತೆಯ ಕಾಗದದ ಮೇಲೆ ಬರೆದ ಬೇರೆ ಬೇರೆ ಚಿತ್ರಗಳು ನಮಗೆ ನೋಡಲು ಸಿಗುತ್ತಿವೆ. 'ಚಿತ್ರ ಬರೆಯಲು ಭಿತ್ತಿ ಬೇಕು' ಎನ್ನುವ ಗಾದೆ ಮಾತಿನಂತೆ ಅನೇಕ ಭಿತ್ತಿ ಚಿತ್ರಗಳೂ ನಮಗೆ ನೋಡಲು ಸಿಗುತ್ತವೆ.

ಆಸ್ಥಾನ ಕಲಾವಿದನಾಗಿರುವುದರಿಂದ ದೊರೆಗಳ ಅರಮನೆಗಳಲ್ಲಿ ಚಿತ್ರಗಳಿವ. ಇನ್ನು ಕೆಲವು ಚಿತ್ರಗಳು ಸುರಪುರದ ಇತರ ಪ್ರಮುಖ ಸ್ಥಳಗಳಾದ ಮಂದಿರಗಳು, ಮಠಗಳು, ಮತ್ತು ಶ್ರೀಮಂತರ ಮನೆಗಳ ಗೋಡೆಗಳು ಮೇಲೂ, ಅಸ್ಥಾನದ ಇತರ ಪ್ರಮುಖರಾದ ಜಹಗೀರುದಾರರು, ಮುಂತಾದವರ ಮನೆಗಳಲ್ಲಿ ಹಾಳೆಯ ಮೇಲೆ ಚಿತ್ರಿಸಿದ ಚಿತ್ರಗಳು, ಅವರ ಕುಟುಂಬದ ಯಜಮಾನ ಮತ್ತು ಇಷ್ಟದೇವತೆಗಳ ಚಿತ್ರಗಳಾಗಿ ಪೂಜೆಗೊಳ್ಳುತ್ತಿವೆ. ರಾಜರ ಸಂಬಂಧಿಕರಿರುವ ಇತರ ಬೇರೆ ಊರುಗಳಲ್ಲಿಯೂ ಚಿತ್ರಗಳು ನೋಡಲು ದೊರೆಯುತ್ತವೆ.

'ಮಾಡಬೇಕೆನ್ನುವುದು ನಾಲಗೆ ಹಾಳು ಮಾಡಿದರೆ, ಮಾಡಿದ್ದೆಲ್ಲವೂ ನಿಸರ್ಗ ಹಾಳುಮಾಡುತ್ತದೆ'. ಎನ್ನುವ ಗಾದೆಮಾತಿನಂತೆ ಬಹುಪಾಲು ಚಿತ್ರಗಳು ಕಾಲನ ತುಳಿತಕ್ಕೆ ಸಿಕ್ಕಿ ನಾಶಗೊಂಡಿವೆ. ಗೋಡೆಯ ಮೇಲೆ ಬರೆದ ಚಿತ್ರಗಳು ಅಜ್ಞ ಜನರ ಕೈಗೆ ಸಿಕ್ಕು ಹಾಳಾಗುವದರ ಜೊತೆಗೆ ಕಾಗದದ ಮೇಲೆ ಬರೆದ ಚಿತ್ರಗಳು ಅವು ಎಷ್ಟು ದಿವಸ ಬಾಳಿಯಾವು? ಈಗ ಉಳಿದಿರುವ ಚಿತ್ರಗಳಲ್ಲಿ ಹೆಚ್ಚಿನವು ವಸ್ತು ಸಂಗ್ರಹಾಲಯಗಳಲ್ಲಿಯೇ ಇವೆ ಎಂದರೆ ತಪ್ಪಾಗದು. ಬ್ರಿಟಿಷ್ ವಸ್ತು ಸಂಗ್ರಹಾಲಯ, ಲಂಡನ್‌ನಲ್ಲಿಯೇ ಸುಮಾರು ಎಂಬತ್ತು ಚಿತ್ರಗಳು

ಸಂಗ್ರಹಗೊಂಡಿವೆ ಎಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಾರೆ. ಸರಕಾರಿ ಪ್ರಾಚ್ಯ ವಸ್ತು ಸಂಗ್ರಹಾಲಯ ಮತ್ತು ಸಾಲಾರಜಂಗ ವಸ್ತು ಸಂಗ್ರಹಾಲಯ, ಹೈದರಾಬಾದ್, ಪ್ರಾಚ್ಯ ವಸ್ತು ಸಂಗ್ರಹಾಲಯ, ನವದೆಹಲಿ, ಜಗನ್ಮೋಹನ ಪ್ಯಾಲೇಸ, ಮೈಸೂರು ಮುಂತಾದ ಪ್ರಮುಖ ಸಂಗ್ರಹಾಲಯಗಳಲ್ಲಿ ಗರುಡಾದ್ರಿಯ ಚಿತ್ರಗಳಿರುವುದು ಹೆಮ್ಮೆಯ ಸಂಗತಿ. ಹಾಗೆ ಇನ್ನೂ ಇತರ ಅನೇಕ ಖಾಸಗಿ ಮತ್ತು ಸರಕಾರಿ ಸಂಗ್ರಹಾಲಯಗಳಲ್ಲಿ ಸಂಗ್ರಹ ಗೊಂಡಿರುವುದನ್ನು ಪತ್ತೆ ಹಚ್ಚಬೇಕಾಗಿದೆ.

ಇಷ್ಟು ದೊಡ್ಡ ಪ್ರಮಾಣದಲ್ಲಿ ರಚನೆಗೊಂಡ ಚಿತ್ರಗಳು ವಿವಿಧ ಕಡೆಗಳಲ್ಲಿ ಸಂಗ್ರಹಗೊಂಡಿದ್ದರೂ ಕಲಾ ಇತಿಹಾಸದಲ್ಲಿ ಇವುಗಳ ಉಲ್ಲೇಖ ಅತ್ಯಂತ ಕಡಿಮೆ ಮತ್ತು ಕಲಾವಿದರ, ಕಲಾವಿಮರ್ಶಕರ ಗಮನಕ್ಕೆ ಬಂದಿರುವುದೂ ತೀರ ಕಡಿಮೆ.

ಉತ್ತರ ಭಾರತದಲ್ಲಿ ಮೊಗಲರು ಕಲೆಗೆ ರಾಜಾಶ್ರಯ ನೀಡಿದ್ದರು. ಅದುವೇ ಮೊಗಲ ಕಲೆ ಎಂದು ಪ್ರಸಿದ್ಧಿಗೊಂಡಿದೆ. ಹಾಗೆ ಉತ್ತರದ ರಜಪೂತರು, ಇತರ ಹಿಂದೂ ಅರಸರು ಪ್ರೋತ್ಸಾಹಿಸಿದ ಕಲೆಯು ರಜಪೂತ ಕಲೆಯಾಗಿ ಮತ್ತು ಖಾಸಗಿಯಾಗಿ ಬೇರೆ ಬೇರೆ ಪ್ರದೇಶಗಳಲ್ಲಿ ಬೆಳೆದು ಕಲೆಯು ಆಯಾ ಪ್ರದೇಶದ ಹೆಸರಿನಿಂದ ಪ್ರಸಿದ್ಧಿಗೊಂಡಿದೆ. ಅದೇ ರೀತಿಯಾಗಿ ದಕ್ಷಿಣ ಭಾರತದಲ್ಲೂ ಕೆಲವು ಅರಸರು ಕಲೆಗೆ ರಾಜಾಶ್ರಯ ನೀಡಿರುವುದರಿಂದ ಅವು ಕಲಾಕೇಂದ್ರಗಳಾಗಿಯೇ ಪ್ರಸಿದ್ಧಿಗೊಂಡಿವೆ. ಅವುಗಳಲ್ಲಿ ಪ್ರಮುಖವಾಗಿ ತಂಜಾವೂರು, ಮೈಸೂರು, ವಿಜಯನಗರ, ಅಹಮದನಗರ, ಬಿಜಾಪುರ, ಹೈದರಾಬಾದ ಮತ್ತು ಸುರಪುರ ಮುಂತಾದವುಗಳು.

ಸುರಪುರವು ಒಂದು ಉತ್ತಮ ಕಲಾಕೇಂದ್ರವಾಗಿರಲು ಅದಕ್ಕೆ ಪೂರಕವೆನ್ನುವಂತೆ ಇಲ್ಲಿ ಸ್ಮರಿಸಲೇಬೇಕಾದ ಇನ್ನೂ ಒಬ್ಬ ಮಹತ್ವದ ವ್ಯಕ್ತಿ - ಕಲಾವಿದ ಅಂದರೆ ಗರುಡಾದ್ರಿಯ ಸಮಯದಲ್ಲಿಯೇ ಇದ್ದ ಆಗಿನ ಬ್ರಿಟಿಷ್

ಅಧಿಕಾರಿ ಕರ್ನಲ್ ಮೀಡೋವ್ಸ್‌ಟೇಲರ. ಇವರು ಕೇವಲ ಒಬ್ಬ ಉತ್ತಮ ಆಡಳಿತಾಧಿಕಾರಿಯಾಗಿರದೆ ಒಬ್ಬ ಮಹಾನ್ ಸಂಶೋದಕ, ಇತಿಹಾಸಕಾರ, ಕಾದಂಬರಿಕಾರ, ಮತ್ತು ಚಿತ್ರಗಾರನೂ ಆಗಿದ್ದನು. ಟೇಲರನು ಆಗಾಗ ರೇಖಾಚಿತ್ರಗಳನ್ನು ಬಿಡಿಸುತ್ತಿದ್ದು ತರುವಾಯ ರೇಖಾಚಿತ್ರ ಮತ್ತು ವರ್ಣಚಿತ್ರ ಕಲೆಯಲ್ಲಿ ಪದವಿಯನ್ನು ಪಡೆದುಕೊಂಡಿದ್ದನು ಎಂಬುದಾಗಿ ಅವನ ಜೀವನ ಚರಿತ್ರೆಯಿಂದ ತಿಳಿದುಬಂದಿದೆ. ಹೀಗೆ ಸುರಪುರವು ಒಂದು ಸುಂದರ 'ಲಲಿತಕಲಾ ಕೇಂದ್ರ' ವಾಗಿತ್ತು ಗರುಡಾದ್ರಿಯ ಸಮಯದಲ್ಲಿ.

### ಗರುಡಾದ್ರಿಯ ಚಿತ್ರಗಳು

ಕರ್ನಾಟಕ ಸಾಂಪ್ರದಾಯಿಕ ಕಲಾ ಸಂಪತ್ತಿನಲ್ಲಿ ಅನೇಕ ಪ್ರಾದೇಶಿಕ - ವೈಯಕ್ತಿಕ ಕಲೆಯನ್ನು ಗುರುತಿಸಲಾಗಿದೆ. ಕರ್ನಾಟಕದ ಕಲೆಯ ಮೇಲೆ ದಕ್ಷಿಣದ ಇತರೆ ಪ್ರದೇಶಗಳ ಕಲಾಪ್ರಕಾರಗಳು ಪ್ರಭಾವ ಬೀರಿದಂತೆ ಒಟ್ಟಾರೆ ದಕ್ಷಿಣದ ಕಲಾಸಂಪ್ರದಾಯದ ಮೇಲೆ ಉತ್ತರ ಭಾರತದ ಮೊಗಲ ಕಲೆಯ ಪ್ರಭಾವವನ್ನು ಕಾಣುತ್ತೇವೆ.

ನಮ್ಮ ಪ್ರಾಚೀನ ಕಲೆಯ ಮೇಲೆ ಎಷ್ಟೇ ಬಾಹ್ಯ ಪ್ರಭಾವಗಳು ಕಂಡು ಬಂದರೂ ಅವೆಲ್ಲವು (ಕಲೆಗಳು) ತಮ್ಮ ತಮ್ಮ ಪ್ರಾದೇಶಿಕತೆಯನ್ನು ಮತ್ತು ವೈವಿದ್ಯತೆಯನ್ನು ಉಳಿಸಿಕೊಂಡು ಬಂದಿವೆ. ಇದಕ್ಕೆ ನಿದರ್ಶನವೆಂದರೆ ಪ್ರಸ್ತುತ ಕಲಾಪಿಟ ಗರುಡಾದ್ರಿಯ ಚಿತ್ರಗಳು. ಒಮ್ಮೆ ಕೇಂದ್ರ ಲಲಿತಕಲಾ ಅಕಾಡೆಮಿಯ ಹಲವು ಪ್ರಕಟನೆಗಳ ಸಂಪಾದಕಿಯೂ, ಪ್ರಸಿದ್ಧ ಕಲಾವಿದೆ ಮತ್ತು ಕಲಾ ವಿಮರ್ಶಕಿಯಾದ ಶ್ರೀಮತಿ ಜಯಾ ಅಪ್ಪಾಸ್ವಾಮಿಯವರು. ಲಂಡನ್ನಿನ ಬ್ರಿಟಿಷ್ ಮ್ಯೂಜಿಯಮ್ ಅನ್ನು ಸಂದರ್ಶಿಸಿದಾಗ ಅವರ ದೃಷ್ಟಿಯ ಕೆಲವು ಚಿತ್ರಗಳ ಮೇಲೆ ಬೀಳಲು ಕೂಡಲೆ ಚಕಿತಗೊಂಡರು. ಅವು ಭಾರತೀಯ ಕಲಾಕೃತಿಗಳು ಮತ್ತು ಅದರಲ್ಲಿಯೂ ಕರ್ನಾಟಕದ ಕೃತಿಗಳಾಗಿರಲೇಬೇಕು ಎಂಬುದು ಅವರ ತೀರ್ಮಾನವಾಗಿತ್ತು. ಮ್ಯೂಜಿಯಮ್ಮಿನ ಅಧಿಕಾರಿಗಳನ್ನು ಕಂಡು ತಾವು ನೋಡಿದ ಚಿತ್ರಗಳು ಎಲ್ಲಿಂದ ಸಂಗ್ರಹಿಸಿದವು? ಎಂದು ಪತ್ತೆ ಹಚ್ಚಲು

ಹೈದರಾಬಾದಿನ ನಿಜಾಮ ಸರ್ಕಾರದಿಂದ ಸಂಗ್ರಹಿಸಿದವು ಎಂಬ ಉತ್ತರ ಪಡೆದರು. ತರುವಾಯ ದೆಹಲಿಯಿಂದ ಹೈದರಾಬಾದಿಗೆ ಪತ್ರ ವ್ಯವಹಾರ ಮಾಡಿ ಅವು ಸುರಪುರದಿಂದ ಕೊಂಡೊಯ್ದವು ಎಂಬುದನ್ನು ತಿಳಿದು ಕೊಂಡರು. ಅಷ್ಟಕ್ಕೆ ತೃಪ್ತರಾಗದೆ 1975 ರಲ್ಲಿ ಸ್ವತಃ ಸುರಪುರವನ್ನು ಸಂದರ್ಶಿಸಿ ಚಿತ್ರಗಳ ಬಗೆಗೆ ವಿವರವಾದ ಮಾಹಿತಿಯನ್ನು ಹಾಗೂ ಛಾಯ ಚಿತ್ರಗಳನ್ನು ಸಂಗ್ರಹಿಸಿಕೊಂಡು ದೆಹಲಿಗೆ ತೆರಳಿದರು. ಈ ಮಾತುಗಳಿಂದ ಗರುಡಾದ್ರಿಯ ಚಿತ್ರಗಳು ಜಯ ಅಪ್ಪಾಸ್ವಾಮಿಯವರ ಮೇಲೆ ಎಷ್ಟು ಗಾಢವಾದ ಪ್ರಭಾವ ಬೀರಿರಬೇಕು ಎಂಬುದು ಸ್ಪಷ್ಟವಾಗುತ್ತದೆ.

ಗರುಡಾದ್ರಿಯು ಆಸ್ಥಾನ ಕಲಾವಿದನಾಗಿದ್ದುದರಿಂದ ಹೆಚ್ಚಾಗಿ ಅರಸರ ಕೋರಿಕೆಯಂತೆ ಚಿತ್ರಗಳನ್ನು ರಚಿಸಬೇಕಾಗಿದ್ದತು. ಕಾರಣ ರಾಜರುಗಳ, ಮಂತ್ರಿಗಳ, ಸುಬೇದಾರರ, ದಿವಾನರ ಮತ್ತು ಆಸ್ಥಾನದ ಇತರ ಅಧಿಕಾರಿಗಳ ಅನೇಕ - ಭಾವಚಿತ್ರಗಳ ರಚನೆಯಾಗಿವೆ. ಪಾಳೆಯಗಾರರ, ದಳವಾಯಿಗಳ, ಕುದುರೆ ಸವಾರರ ಮತ್ತು ಬೇಟೆಯ ದೃಶ್ಯದ ಚಿತ್ರಗಳು ಸಾಕಷ್ಟು ಚಿತ್ರಿತಗೊಂಡಿವೆ.

ತರುವಾಯಿ ಸಂಸ್ಥಾನಿಕರು ತಿರುಪತಿಯ ಶ್ರೀ ವೆಂಕಟರಮಣನ ಪರಮ ಭಕ್ತರಾಗಿರುವುದರಿಂದ ಪೂಜೆಗಾಗಿ ಶ್ರೀವೆಂಕಟರಮಣನ ಸಾಕಷ್ಟು ಚಿತ್ರಗಳು ನಿರ್ಮಾಣಗೊಂಡಿವೆ. ಹಾಗೆಯೆ ಇಷ್ಟದೇವರು ಶ್ರೀವೇಣುಗೋಪಾಲ ಸ್ವಾಮಿ ಆಗಿರುವುದರಿಂದ ಕೃಷ್ಣನ ಲೀಲೆಯ ಅನೇಕ ಚಿತ್ರಗಳೂ, ಶಿವಪಾರ್ವತಿ, ಲಕ್ಷಿ, ಸರಸ್ವತಿ, ಹನುಮ, ಗರುಡ ಮುಂತಾದ ದೇವತೆಗಳ ಚಿತ್ರಗಳೂ ಮತ್ತು ಈ ಭಾಗದ ಪ್ರಸಿದ್ಧ ದೈವಗಳಾದ ಶ್ರೀದತ್ತಾತ್ರೇಯ, ಶ್ರೀ ಮಾಣಿಕ ಪ್ರಭು, ಶ್ರೀಮಾರ್ತಂಡ ಪ್ರಭು, ಶ್ರೀರಾಘವೇಂದ್ರ ಸ್ವಾಮಿಗಳ ಚಿತ್ರಗಳು ನಮಗೆ ನೋಡಲು ಈಗಲೂ ದೊರೆಯುತ್ತವೆ.

ಊರಿನ ಇತರ ನಾಗರಿಕರನೇಕರು ಶ್ರೀವೆಂಕಟರಮಣನ ಮತ್ತು

ಶ್ರೀವೇಣುಗೋಪಾಲನ ಆರಾಧಕರಾಗಿರುವುದರಿಂದ ಬಹಳಷ್ಟು ಜನರ ಮನೆಯಲ್ಲಿ ಗರುಡಾದ್ರಿಯಿಂದ ಚಿತ್ರಿಸಲ್ಪಟ್ಟ ಶ್ರೀ ವೆಂಕಟರಮಣನ ಮತ್ತು ಶ್ರೀಕೃಷ್ಣನ ಚಿತ್ರಗಳು ಉತ್ತಮ ಸ್ಥಿತಿಯಲ್ಲಿದ್ದು ಪೂಜೆಗೊಳ್ಳುತ್ತಿವೆ. ಶ್ರೀರಾಮ ಪಟ್ಟಾಭಿಷೇಕ, ಶ್ರೀವೈಕುಂಠ ನಾರಾಯಣನ ಚಿತ್ರಗಳು ಕೆಲವರ ಮನೆಗಳಲ್ಲಿ ಇವೆ. ಈ ಚಿತ್ರಗಳ ರಚನೆಯಲ್ಲಿ ಕಾಣುವ ಒಂದು ಹೊಸ ಅಂಶವೆಂದರೆ - ಕುಟುಂಬದ ಯಜಮಾನರ ಭಾವ ಚಿತ್ರಗಳ ಮತ್ತು ದೇವತೆಗಳ ಚಿತ್ರಗಳನ್ನು ಒಂದೇ ಚಿತ್ರದಲ್ಲಿ ಸಂಯೋಜಿಸಿ ಚಿತ್ರಿಸಲಾಗಿದೆ. ಪೂಜೆ ಮಾಡುವವರಿಗೆ ಅಥವಾ ನೋಡುಗರಿಗೆ ಮನೆಯ ಹಿರಿಯರ ಮತ್ತು ದೇವರ ದರ್ಶನವು ಏಕ ಕಾಲಕ್ಕೆ ಆಗುತ್ತದೆ.

ಸಾರ್ವಜನಿಕ ಸ್ಥಳಗಳಾದ ದೇವಾಲಯಗಳು ಹಾಗೂ ಮಠಗಳಲ್ಲಿ ಮಹಾಭಾರತ, ರಾಮಾಯಣ ಮತ್ತು ಭಾಗವತ ಪುರಾಣಗಳಲ್ಲಿ ಬರುವ ಘಟನೆಗಳ ಚಿತ್ರಗಳು, ಗಿಡ - ಮರಗಳು ಮತ್ತು ಸುಳುವಿನ ಚಿತ್ರಗಳನ್ನು ಶ್ರವಣಬೆಳಗೊಳ, ಲೇಪಾಕ್ಷಿ, ವಿಜಯ ನಗರ, ಶಿಬಿ ಮುಂತಾದ ಕಡೆಗಳಂತೆ ವಿಶೇಷ ಸಿದ್ಧತೆಯೊಂದಿಗೆ ನಿರ್ಮಿಸಿದ ಚಿತ್ರಗಳಾಗಿವೆ. ಬಳಸಿರುವ ಬಣ್ಣಗಳೂ ಖನಿಜ ಬಣ್ಣಗಳಾಗಿದ್ದು ಕಡುಗೆಂಪು ಮತ್ತು ನೀಲಿ ಪ್ರಮುಖ ಬಣ್ಣಗಳಾಗಿವೆ. ಚಿತ್ರಗಳ ಒಳಭಾಗದಲ್ಲಿ ಚಪ್ಪಟೆಯಾಗಿ ಬಣ್ಣತುಂಬಿ ಬಲವಾದ ಬಾಹ್ಯ ರೇಖೆಗಳಿಂದ ಪೂರ್ಣಗೊಳಿಸಲಾಗಿವೆ.

ಹಾಳೆಯಮೇಲೆ ಬರೆದ ಚಿತ್ರಗಳೂ ಅತ್ಯಂತ ಉನ್ನತ ಮಟ್ಟದ ಸುಂದರ ಚಿತ್ರಗಳಾಗಿವೆ. ಇವು ನಮ್ಮ ಸಾಂಪ್ರದಾಯಿಕ ಚಿತ್ರಕಲಾ ಶೈಲಿಯ, ಮಿನಿಯೇಚರ ಚಿತ್ರಗಳಾಗಿದ್ದು ಕೆಲವು ದೊಡ್ಡ ಗಾತ್ರದ ಚಿತ್ರಗಳೂ ಮಿನಿಯೋಚರ ಮಾದರಿಯಲ್ಲಿಯೇ ಚಿತ್ರಿಸಲಾಗಿವೆ. ಅತ್ಯಂತ ಕಡಿವೆ ವರ್ಣಗಳನ್ನು ಉಪಯೋಗಿಸಿ ರಚಿಸಿದ ಸಂಯೋಜನಾ ಚಿತ್ರಗಳಿವು.

ಎಲ್ಲ ಚಿತ್ರಗಳಲ್ಲಿ ಕೆಲವೆ ವರ್ಣಗಳನ್ನು ಪುನರಾವರ್ತಿಸಿದರೂ ವಿನ್ಯಾಸ

ರಚನೆಯಲ್ಲಿ ಹೆಚ್ಚಿನ ಜಾಣ್ಮೆಯನ್ನು ಕಾಣುತ್ತೇವೆ. ಚಿತ್ರಗಳಲ್ಲಿ ಬರುವ ಮನುಷ್ಯಾಕೃತಿಗಳ ಮೈಮೇಲಿನ ಆಭರಣಗಳು, ಸೀರೆ, ಕುಪ್ಪಸ, ತಲೆಗೆ ಸುತ್ತಿಕೊಂಡ ಪೇಟ (ರುಮಾಲು ), ಹೊದ್ದುಕೊಂಡ ಶಾಲು ಮುಂತಾದ ವಸ್ತ್ರಗಳ ಅಂಚುಗಳು ಮತ್ತು ನಕ್ಷೆಗಳು, ದೇವದೇವತೆಗಳ ಹಿನ್ನೆಲೆಯ ಪ್ರಭಾವಳಿ, ಕಿರೀಟ ಮತ್ತು ಇತರ ಸುಳುವಿನ ಆಕೃತಿಗಳು, ಸಂಯೋಜನೆಯ ಅನುಕೂಲಕ್ಕಾಗಿ ಮಾಡಿದ ಅಲ್ಲಲ್ಲಿನ ಪಟ್ಟಿಗಳು, ಇತ್ಯಾದಿಗಳ ಸಂದರ್ಭದಲ್ಲಿ ಬಳಸಿರುವ ಬಂಗಾರದ ಪತ್ರವು ಚಿತ್ರಗಳ ಶ್ರಿಮಂತಿಕೆಯನ್ನು ಹೆಚ್ಚಿಸಿವೆ. ಕೊನೆಯಲ್ಲಿ ಚಿತ್ರಗಳ ಆಕೃತಿಗಳು ಅತ್ಯಂತ ತೆಳುವಾದ ಮತ್ತು ಸೂಕ್ಷ್ಮವಾದ ಬಾಹ್ಯರೇಖೆಗಳಿಂದ ಪೂರ್ಣಗೊಳಿಸಿರುವುದು ನೋಡುಗರಿಗೆ ಅತೀಂದ್ರಿಯ ಅನುಭವ ಕೊಡುತ್ತವೆ. ಇಂಥ ಅತೀಂದ್ರಿಯ ಅನುಭವ ಕೊಡುವ, ಭಾವನಾಲೋಕದಲ್ಲಿ ತೇಲಿಬಿಡುವ ಕಾರ್ಯಮಾಡುವುದೇ ನಮ್ಮ ಭಾರತೀಯ ಕಲೆಯ ವೈಶಿಷ್ಯ. ಚಿತ್ರಗಳಲ್ಲಿನ ಮನುಷ್ಯಾಕೃತಿಗಳನ್ನು ಗಮನಿಸಲು ಅವು ಸ್ವಲ್ಪಮಟ್ಟಿಗೆ ಲೇಪಾಕ್ಷಿಯ ಚಿತ್ರಗಳಲ್ಲಿನ ಮನುಷ್ಯಾಕೃತಿಗಳಿಗೆ ಹೋಲುತ್ತವೆ. ತಲೆ ಮತ್ತು ದೇಹಕ್ಕಿಂತ ಕಾಲುಗಳೆರಡೂ ಮುಂದಕ್ಕೆ ವಾಲಿದಂತೆ ಇವೆ. ದೇಹದ ಭಾರವು ಕಾಲುಗಳ ಮೇಲೆ ಬೀಳದೇ ಇದ್ದಂತೆ ಕಂಡರೂ ಭಾವನೆಗಳಿಗೆ ಭಂಗ ಬರುವುದಿಲ್ಲ.

ಗರುಡಾದ್ರಿಯು "ಚಿತ್ರ ಮತ್ತು ಶಿಲ್ಪ ಶಾಸ್ತ್ರ" ಬಲ್ಲವನಾಗಿದ್ದುದರಿಂದ ದೇವತೆಗಳ, ಋಷಿ - ಮುನಿಗಳ ಮತ್ತು ಮಾನವರ ಚಿತ್ರಗಳನ್ನು ಶಾಸ್ತ್ರಗಳ ಪದ್ಧತಿಯಂತೆ ನಿರ್ಮಿಸಿದ್ದಾನೆ. ಮುಖದ ಮೇಲಿನ ಭಾವನೆಗಳೂ ಸಹ ಅತ್ಯಂತ ಯಶಸ್ವಿಯಾಗಿವೆ. ಆಯ್ದುಕೊಂಡ ಚಿತ್ರದ ವಿಷಯಗಳೆಲ್ಲವೂ ನಮ್ಮ ಸಾಂಪ್ರದಾಯಿಕ ಕಲೆಗಳಲ್ಲಿ ವಿವಿಧ ಕಡೆ ಪುನಾರಾವರ್ತಿತಗೊಂಡರೂ - ರೇಖೆಗಳ ವಿನ್ಯಾಸ, ಆಕೃತಿಗಳ ಸಂಯೋಜನೆ, ಬಂಗಾರದ ಪತ್ರದ ಬಳಕೆಯನ್ನು ವಿಶೇಷವಾಗಿ ಗಮನಿಸಲು - ಇತರ ಚಿತ್ರಗಳಿಂದ ಗರುಡಾದ್ರಿಯ ಚಿತ್ರಗಳನ್ನು ಸುಲಭವಾಗಿ ಬೇರ್ಪಡಿಸಬಹುದು. ಕೇಸರಿ, ಬಿಳಿ, ತಿಳಿಹಳದಿ ವರ್ಣಗಳು ಮತ್ತು ಬಂಗಾರದ ಪತ್ರಗಳಿಂದ ನಿರ್ಮಾಣಗೊಂಡ ಪ್ರಭಾವಳಿ ಕಮಾನುಗಳು

ಮತ್ತು ಮನುಷ್ಯಾಕೃತಿಗಳು, ಹಿನ್ನೆಲೆಯ ದಟ್ಟವಾದ ನೀಲಿ ವರ್ಣವು ಚಿತ್ರಗಳಲ್ಲಿ ಏರಿಳಿತಗಳನ್ನು ಉಂಟುಮಾಡಿವೆ. ಈ ಹಿನ್ನಲೆಯ ನೀಲಿ ವರ್ಣದಲ್ಲಿಯೇ ನಕ್ಷತ್ರಗಳು ಅಥವಾ ಗಾಜಿನ ತೂಗು ದೀಪಗಳು ಮತ್ತು ಮುನ್ನೆಲೆಯಲ್ಲಿ ಬಂಗಾರದ ತಟ್ಟೆಗಳು, ಹೂಜಿಗಳು, ಇತರ ಐಹಿಕ ವಸ್ತುಗಳನ್ನು ವಿಶೇಷವಾಗಿ ಬಳಸಿರುವುದು ಗರುಡಾದ್ರಿಯ ಚಿತ್ರಗಳ ಮುಖ್ಯ ಆಕರ್ಷಣೆ.

ಸುರಪುರದ 'ರಂಗಮ್ಮ ಪೇಟೆ' ಯಲ್ಲಿನ ರುದ್ರಸ್ವಾಮಿ ಮಠದ ಗೋಡೆಗಳ ಮೇಲೆ ಗರುಡ್ರಾದ್ರಿ ಮನೆತನದವರು ಬರೆದ ಬಹಳಷ್ಟು ಚಿತ್ರಗಳಿದ್ದವೆಂದೂ, ಆದರೆ ಈಗ್ಗೆ ಕೇವಲ ಹತ್ತೆಂಟು ವರ್ಷಗಳ ಹಿಂದೆಯೇ ಅವನ್ನು ಅಳಿಸಿಹಾಕಲಾಗಿವೆ ಎಂಬುದನ್ನು ತಿಳಿದು ಅತ್ಯಂತ ಖೇದವೆನಿಸಿತು. ಚಿತ್ರಗಳು ಮಾಸಿಹೋಗಿವೆ. ಅವನ್ನು ಪೂರ್ತಿಯಾಗಿ ಅಳಿಸಿ ಈಗಿನ ವಾತಾವರಣಕ್ಕೆ ತಕ್ಕಂತೆ ಗೋಡೆಗಳನ್ನು ಪ್ಲಾಸ್ಟರ ಮಾಡಿಸುವುದು ಒಳಿತು ಎಂದು ಭಾವಿಸಿ ದುಡುಕಲಾಗಿದೆ ಎಂಬುದಾಗಿ ತಿಳಿದು ಬಂದಿತು. ಜನಸಾಮಾನ್ಯರಲ್ಲಿ ಕಲೆಯ ಮಹತ್ವ ಗೊತ್ತಿಲ್ಲದಿರುವುದರಿಂದ ಅಲ್ಲಲ್ಲಿ ಇಂಥ ಅಚಾತುರ್ಯದ ಕಾರ್ಯಗಳು ನಡೆಯುವದು ಸಹಜವೇ. ಇದಕ್ಕೆ 'ಕಾಲಾಯೇ ತಸ್ಮೈನಮಃ' ಎನ್ನದೆ ಅನ್ಯಗತಿಯಿಲ್ಲವೆನ್ನಬಹುದಲ್ಲವೆ?

ಇದೇ 'ರಂಗಮ್ಮ ಪೇಟೆ' ಯಲ್ಲಿ ಇನ್ನೊಂದು ಮಠವಿದೆ. ಅದರ ಹೆಸರು 'ಅಣ್ಣಯ್ಯನ ಮಠ'. ಗೋಡೆಗಳು ಸಾಕುಷ್ಟು ಜೀರ್ಣಗೊಂಡಿರುವ ಮಠದ ಮುಂಭಾಗದಲ್ಲಿ ಹಲವು ಚಿತ್ರಗಳು ಇರುವುದನ್ನು ಈಗಲೂ ನಾವು ನೋಡಬಹುದು. ಸುಮಾರು ಹದಿನೈದು ಅಡಿ ಅಗಲ ಮತ್ತು ಇಪ್ಪತ್ತು ಅಡಿ ಉದ್ದವಿರುವ ಮಠದ ಪಡಶಾಲೆಯ ಮೂರು ಬದಿಯ ಗೋಡೆಗಳಿಗೆ, ನೆಲದಿಂದ ಎರಡು ಅಡಿ ಅಂತರದಿಂದ ಮೇಲ್ಛಾವಣಿಯವರೆಗೆ ಚಿತ್ರಗಳಿವೆ. ಒಂದೊಂದು ಗೋಡೆಯ ಮೇಲೆ ಒಂದೊಂದು ಬಗೆಯ ಚಿತ್ರಗಳಿವೆ.

ಒಂದು ಬದಿಯ ಗೋಡೆಗೆ ಮೇಲ್ಛಾವಣೆಗೆ ಹೊಂದಿಕೊಂಡು ಸುಮಾರು ಎರಡು ಅಡಿ ಅಗಲ ಮತ್ತು ಮೂರು ಅಡಿ ಉದ್ದ ಮೂರು ಮುಖ್ಯ ಸಂಯೋಜನಾ

ಚಿತ್ರಗಳಿವೆ. ಅವುಗಳಲ್ಲಿ ಎರಡು ಪೌರಣಿಕ ಕಥೆಗಳಿಗೆ ಸಂಬಂಧಿಸಿದವು ಮತ್ತು ಮೂರನೆಯದು ಮಹಾಭಾರತದ ಕಥೆಗೆ ಸಂಬಂಧಿಸಿದುದು ಇದೆ. ಸಂಯೋಜನೆಯ ದೃಷ್ಟಿಯಿಂದ ಪೌರಾಣಿಕ ವಿಷಯಕ್ಕೆ ಸಂಬಂಧಿಸಿದ 'ಸಮುದ್ರ ಮಂಥನ' ಮತ್ತು 'ಗಿರಿಜಾ ಕಲ್ಯಾಣ' ಚಿತ್ರಗಳಿಗಿಂತ ಮಹಾಭಾರತದ ಕತೆಗೆ ಸಂಬಂಧಿಸಿದ 'ದ್ರೌಪದಿಯ ಸ್ವಯಂವರ' ಚಿತ್ರವು ಉತ್ತಮ ಚಿತ್ರವಾಗಿದೆ. ಕೆಂಪು, ನೀಲಿ ಮತ್ತು ಹಳದಿ ಬಣ್ಣಗಳ ಬಳಕೆಯು 'ಜನಪದ ಕಲಾ' ಮಾದರಿಯಂತೆ ಸಾಮಾನ್ಯ ವಾಗಿದ್ದು, ರೇಖೆಗಳ ಬಳಕೆಯೂ ಸೂಕ್ಷ್ಮವಾಗಿರದೆ ದಿಟ್ಟವಾದ ರೇಖೆಗಳಿಂದ ಪೂರ್ಣಗೊಳಿಸಲಾಗಿದೆ. ಆದರೆ ಆಕೃತಿಗಳನ್ನು ಚಿತ್ರಿಸುವಲ್ಲಿ ಸ್ಥಳಾವಕಾಶದ ವಿಭಜನೆಯು ಉನ್ನತ ಮಟ್ಟದ ಸಂಯೋಜನೆಯ ಮಾದರಿಯದಾಗಿದ್ದು ನೋಡುಗರನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ. ಕಾರಣ ಈ ಚಿತ್ರಗಳನ್ನು ಗೋಡೆಯಮೇಲೆ ಬರೆದ ಚಿತ್ರಗಳೆಂದು ಗೌಣವಾಗಿ ಪರಿಗಣಿಸುವಂತಿಲ್ಲ. ನಿಃಸಂಶಯವಾಗಿಯೂ ಇವು ಕಲಾತ್ಮಕ ದೃಷ್ಟಿಯಿಂದ ಅತ್ಯಂತ ಮೌಲಿಕವಾದುವುಗಳು.

ಗೋಡೆಯ ಇನ್ನೆರಡು ಬದಿಗಳು ಚಿತ್ರಗಳೂ ಬಹಳ ಚಿತ್ತಾಕರ್ಷಕವಾಗಿವೆ. ತ್ರಿಮೂರ್ತಿಯ ಚಿತ್ರ, ಪ್ರಣಯಿಗಳ ಚಿತ್ರ, ಕಾಮಧೇನು, ಕೀಚಕನ ವಧೆ, ಕೈಯಲ್ಲಿ ಆರತಿ ಹಿಡಿದಿರುವ ಸುಮಂಗಲೆ, ಕುಸ್ತಿಯ ಪಟುಗಳ ಸಾಲು, ಮಂಗ ಮತ್ತು ಇತರ ಪ್ರಾಣಿಗಳ ಚಿತ್ರಗಳು, ಸುಳುವಿನಾಕೃತಿಯ ಚಿತ್ರಗಳು ಮುಂತಾದವುಗಳು ಉನ್ನತ ಮಟ್ಟದ ಚಿತ್ರಗಳಾಗಿವೆ. ಮಠದಲ್ಲಿರುವ ಈ ಎಲ್ಲ ಕಲಾ ಸಂಪತ್ತನ್ನು ಈಗಿರುವ ಮಠಾದೀಶರು ಅತ್ಯಂತ ಕಾಳಜಿಯಿಂದ ಕಾಯ್ದುಕೊಂಡು ಬಂದಿದ್ದಾರೆ.

ಮೇಲೆ ಹೇಳಿರುವ ಈ ಎಲ್ಲ ಕಲಾಸಂಪತ್ತಿನ ಜೊತೆಗೆ ಇನ್ನೂ ಕೆಲವು ವಿಶೇಷ ಚಿತ್ರಗಳು ರಡನೆಗೊಂಡಿರುವುದು ಅತ್ಯಂತ ಹೆಮ್ಮೆಯ ವಿಷಯ .ಸುರಪುರ ಸಮೀಪದ ಹಳ್ಳಿಯೊಂದರಲ್ಲಿ, ಓರ್ವ ಜಂಗಮರ ಮನೆಯಲ್ಲಿ ದೊರೆತಿರುವ, ಗ್ರಂಥಗಳಿಗಾಗಿ ಬರೆದ ಸಾಂಧರ್ಭಿಕ - ಚಿತ್ರಗಳೇ ಈ ವಿಶೇಷ ಕಲಾಕೃತಿಗಳು.

ಅಜಂತೆಯ ಬೃಹತ್. ಚಿತ್ರಗಳ ರಚನೆಯ. ನಂತರ ಜೈನ ಗ್ರಂಥಗಳಲ್ಲಿ ಸಾಂದರ್ಭಿಕ ಚಿತ್ರಗಳನ್ನು ಬರೆಯುವುದರ ಮೂಲಕ ಈ ಚಿಕ್ಕ ಗಾತ್ರದ ಚಿತ್ರಗಳನ್ನು ರಚಿಸುವ ಒಂದು ಪ್ರಕ್ರಿಯೆಯು ನಮ್ಮ ದೇಶದಲ್ಲಿ ಪ್ರಾರಂಭವಾಯಿತು. ಮೊಘಲ ಅರಸರ ಪ್ರೊತ್ಸಾಹದಿಂದ ಗ್ರಂಥಗಳಿಗಾಗಿ ನಿರ್ಮಿಸಿದ ಚಿತ್ರಗಳು ಇತರ ಕೋರ್ಟ ದೃಶ್ಯದ ಚಿತ್ರಗಳು ಮತ್ತು ರಾಜಸ್ಥಾನ ಮುಂತಾದ ಪಹಾಡಿ ಪ್ರದೇಶಗಳಲ್ಲಿ ಹಿಂದೂ ಕಲಾವಿದರಿಂದ ರಚಿತಗೊಂಡ ಕಲಾಕೃತಿಗಳನ್ನು ಕ್ರಮವಾಗಿ ಮೊಘಲ ಮತ್ತು ರಜಪೂತ ಮಿನಿಯೇಚರ ಕಲಾಕೃತಿಗಳೆಂದು ವರ್ಗೀಕರಿಸಲಾಗಿದೆ. ಒಂದು ಒಂದೂವರೆ ಅಂಗುಲ ಅಳತೆಯಿಂದ ನಾಲ್ಕೆಂಟು ಅಂಗುಲ ಅಳತೆಯ ಈ ಕಿರುಗಾತ್ರದ ಕಲಾಕೃತಿಗಳಿಗೆ 'ಮಿನಿಯೇಚರ' ಕೃತಿಗಳು ಎಂದು ಹೆಸರಿಸಿದವರು ಖ್ಯಾತ ಕಲಾ ವಿಮರ್ಶಕರಾಗಿದ್ದ ಡಾ. ಕೆ ಆನಂದ ಕುಮಾರ ಸ್ವಾಮಿಯವರು. ಈ ಚಿಕಣಿ ಚಿತ್ರಗಳಲ್ಲಿ ರೇಖೆಗಳನ್ನು ಅತಿ ಸೂಕ್ಷ್ಮವಾಗಿ ಬಳಸುವದರಿಂದ ಚಿತ್ರದಲ್ಲಿ ನಯನಾಜೂಕುತನ ಹೆಚ್ಚಾಗಿ ನೋಡುಗರಿಗೆ ಸುಂದರವಾಗಿಯೂ, ಭಾವಪೂರ್ಣವಾಗಿಯು ಕಾಣಿಸುತ್ತವೆ. ಕರ್ನಾಟಕದಲ್ಲಿಯೂ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ತಾಡೋಲೆಯ ಮೇಲೆ ಅನೇಕ ಚಿಕಣಿ ಚಿತ್ರಗಳು ನಿರ್ಮಾಣಗೊಂಡಿವೆ.

ಇದೇ ರೀತಿಯಾಗಿ ಸುಮಾರು ಕ್ರಿ.ಶ 14ನೆಯ ಶತಮಾನದಲ್ಲಿ ರಚಿತವಾದ 'ಚೆನ್ನಬಸವ ಪುರಾಣ'ವು ಮುದ್ರಣಗೊಳ್ಳುವುದಕ್ಕಿಂತ ಪೂರ್ವದಲ್ಲಿ ಮೂಲ ಗ್ರಂಥದ ಹಸ್ತಪ್ರತಿಗಳನ್ನು ಮೇಲಿಂದ ಮೇಲೆ ಸಿದ್ಧಪಡಿಸಲಾಗುತ್ತಿತ್ತು. ಹೀಗೆ ಸಿದ್ಧಪಡಿಸುವಾಗ, ಪುರಾಣದ ಕಥಾವಸ್ತುವಿನ ಸನ್ನಿವೇಶಗಳಿಗೆ ಸಂಬಂಧಿಸಿದಂತೆ ' ಗರುಡಾದ್ರಿಯವರಿಂದ ಕೆಲವು ಸಾಂದರ್ಭಿಕ ಚಿತ್ರಗಳನ್ನು ಬರೆಯಸಿ ಗ್ರಂಥಕ್ಕೆ ಸೇರಿಸಲಾಗಿದೆ. ದಪ್ಪವಾದ ಕೋರಿಹಾಳೆಯ ಮೇಲೆ ರಚಿಸಿರುವುದರಿಂದ ಇವುಗಳ ಕಾಲ ಸುಮಾರು ಕ್ರಿ. ಶ. 1850 ಇರಬೇಕು ಎಂಬುದಾಗಿ ತಜ್ಞರ ಅಭಿಪ್ರಾಯವಾಗಿದೆ. ಈ ರೀತಿ ಇನ್ನೂ ಎಷ್ಟೋ ಚಿತ್ರಗಳು ಗರುಡಾದ್ರಿಯಿಂದ ಗ್ರಂಥಗಳಿಗಾಗಿ ನಿರ್ಮಾಣವಾಗಿರಬೇಕು.

**ಚಿತ್ರಗಳ ವಿವರಣೆ**

'ಸುರಪುರ ನಾಯಕ' ತಲೆ ಬರಹವನ್ನು ಹೊಂದಿರುವ ಒಂದು ಚಿತ್ರ ಶ್ರೀಜಯಚಾಮರಾಜೇಂದ್ರ ವಸ್ತುಸಂಗ್ರಹಾಲಯ, ಜಗನ ಮೋಹನ ಪ್ಯಾಲೇಸ್, ಮೈಸೂರಿನಲ್ಲಿದೆ, ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ( ಕ್ರಿ. ಶ. 1835 - 1858) ದಕ್ಷಿಣದ ಎಲ್ಲ ರಾಜರುಗಳ ಜೊತೆಗೆ ಸಮಾಲೋಚನೆ ಮಾಡುತ್ತಿರುವ ದೃಶ್ಯ ಎಂದು ಹೇಳಲಾಗುತ್ತಿದೆ. ಮಧ್ಯದಲ್ಲಿ ಕಾರ್ಪೆಟ್ಟಿನ ಮೇಲೆ ರಾಜಾ ವೆಂಕಟಪ್ಪ ನಾಯಕನು ಕುಳಿತಿರುವನು. ಎದುರಿಗೆ ಒಬ್ಬ ಬ್ರಿಟಿಷ್ ಅಧಿಕಾರಿ ಕುಳಿತ್ತಿದ್ದಾನೆ. ಹಿಂದುಗಡೆ ದರ್ಬಾರಿನ ಇತರ ಜನರು ಕುಳಿತ್ತಿದ್ದಾರೆ. ಕುಡತಾ ಪೈಜಾಮದಂತಹ ಉಡುಪುಗಳು. ಕೈಯಲ್ಲಿ ಕೋಲುಗಳು ಮತ್ತು ಚಿಕ್ಕ ಹತಿಯಾರಗಳು ಇವೆ. ಹಿಂದೆ ಹಾಗೂ ಎದುರುಗಡೆ ನಿಂತ ವ್ಯಕ್ತಿಗಳ ಕೈಯಲ್ಲೂ ತಲವಾರಗಳು ಇವೆ. ಎದುರು ಬದಿಯಲ್ಲಿ ಕುಳಿತ ಕೆಲವು ಜನರ ಕೈಯಲ್ಲಿ ಸಂಗೀತ ವಾದ್ಯಗಳಿವೆ. ಚಿತ್ರದುದ್ದಕ್ಕೂ ಮುಂಭಾಗದಲ್ಲಿ ಕಾರ್ಪೆಟ್ಟು ಇದೆ. ಮಧ್ಯಭಾಗದಲ್ಲಿ ಮನುಷ್ಯಾಕೃತಿಗಳು, ಮತ್ತು ಹಿನ್ನೆಲೆಯಲ್ಲಿ ಮೂರು ಕಮಾನುಗಳ ಮಹಲನ್ನು ಚಿತ್ರಿಸಿದೆ. ಈ ಮಹಲು ರಾಜಸ್ಥಾನಿ ಮಿನಿಯೇಚರ ಚಿತ್ರಗಳ ಹಿನ್ನೆಲೆಯನ್ನು ಸ್ಮೃತಿಗೆ ತರುತ್ತದೆ. ಚಿತ್ರದ ತೀರ ಮೇಲ್ಭಾಗದಲ್ಲಿ ಆಕಾಶವನ್ನು ಅತ್ಯಂತ ಗಾಢ - ನೀಲವರ್ಣದಿಂದ ಪೂರ್ಣಗೊಳಿಸಿರುವುದರಿಂದ ನೋಡುಗರಿಗೆ ಅವಕಾಶದ ಅತೀತದ ಕಲ್ಪನೆಗೆ ದೊಡುತ್ತದೆ.

ಇನ್ನೊಂದು ಚಿತ್ರ ಶ್ರೀ ದತ್ತಾತ್ರೇಯನದು. (ಅಳತೆ 4.25 X 6.00 ಅಂಗುಲ). ಯಥಾರೀತಿ ಕಮಾನಿನಲ್ಲಿ ತ್ರಿಭಂಗಿಯಲ್ಲಿ ನಿಂತ ತ್ರಿಮೂರ್ತಿಯ ಆಕೃತಿ. ಶಿವನ ಭಾಗವನ್ನು ಬಿಳಿಯ ವರ್ಣ, ವಿಷ್ಣುವಿನ ಭಾಗ ತಿಳಿನೀಲಿ ಹಾಗೂ ಬ್ರಹ್ಮನ ಭಾಗವನ್ನು ( ಅಂದರೆ ಎಲ್ಲ ಕೈಯ ಮತ್ತು ಮುಖದ ಭಾಗಗಳು ) ಕಂದುಗೆಂಪುಗಳಲ್ಲಿ ಚಿತ್ರಸಿದೆ. ಧೋತರವು ಹಸಿರು ವರ್ಣದಿಂದಲೂ ಮತ್ತು ಕಿರೀಟವನ್ನು ಬಂಗಾರ ವರ್ಣಗಳಿಂದ ಅಲಂಕಾರಣಗೊಳಿಸಲಾಗಿದೆ. ಎದುರು ಬದಿಯ ಮುಖವು ವಿಷ್ಣುವಿನದು, ಬಲಕ್ಕೆ ಬ್ರಹ್ಮನ ಮತ್ತು ಎಡಕ್ಕೆ ಶಿವನ ಮುಖ ಇದೆ. ದತ್ತಾತ್ರೇಯನ

ಅಡಿಯಲ್ಲಿ ವಿರುದ್ಧ ದಿಕ್ಕಿಗೆ ಮುಖಮಾಡಿದ ಎರಡು ನಾಯಿಗಳ ಆಕೃತಿಗಳಿವೆ. ಕಮಾನಿನ ನಕ್ಷೆಯು ಇತರ ಎಲ್ಲ ಚಿತ್ರಗಳಂತೆ ಸೂಕ್ಷ್ಮವಾಗಿದ್ದು ಕಮಾನು ಹೊರತುಪಡಿಸಿದ ಹಿನ್ನೆಲೆಯನ್ನು ಕಡುನೀಲಿ ವರ್ಣದಿಂದ ಪೂರ್ಣಗೊಳಿಸಲಾಗಿದೆ.

ಹೆಚ್ಚಿನ ಸಂಖ್ಯೆಯಲ್ಲಿ ರಚನೆಗೊಂಡ ಶ್ರೀ ವೆಂಕಟರಮಣನ ಚಿತ್ರಗಳು ಬಹಳ ಆಕರ್ಷಣೀಯವಾಗಿವೆ. ಶ್ರೀ ವೆಂಕಟೇಶ್ವರನ ಎಡಬಲಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರು ನಿಂತಿರುವ ಆಕೃತಿಗಳಿವೆ. ಕಮಾನಿನಿಂದ ಆವೃತಗೊಂಡ ಚಿತ್ರದ ಮಧ್ಯದಲ್ಲಿ ಪ್ರಭಾವಳಿಯು ಬಹಳ ಸುಂದರವಾಗಿದೆ. ಇದರ ಹಿನ್ನೆಲೆಯನ್ನು ದಟ್ಟವಾದ ನೀಲಿವರ್ಣದಿಂದಲೂ ಹಾಗೂ ಉಳಿದ ಚಿತ್ರದ ಬಹುಭಾಗವನ್ನು ಬಂಗಾರದ ಪತ್ರದಿಂದ ನಕ್ಷೆಯೊಂದಿಗೆ ಅಲಂಕರಿಸಿರುವುದರಿಂದ ಒಟ್ಟಾಗಿ ಚಿತ್ರಗಳು ಬಹು ರಮ್ಯವಾಗಿ ಕಾಣುತ್ತಿವೆ. ಈ ಚಿತ್ರಗಳು ಅನೇಕರು ತಮ್ಮ ಇಷ್ಟದೇವತೆಯೆಂದು ಉದ್ದೇಶ ಪೂರ್ವಕವಾಗಿ ಬರೆಸಿದ ಚಿತ್ರಗಳಾಗಿರುವುದರಿಂದ ಈಗಲೂ ಅನೇಕರ ಮನೆಯಲ್ಲಿ ನಿತ್ಯ ಪೂಜೆಗೊಳ್ಳುತ್ತಿವೆ.

'ಕೋದಂಡರಾಮ' ಶೀರ್ಷಿಕೆಯ ಚಿತ್ರದ ಅಳತೆ 8.5 X 6.75 ಅಂಗುಲವಿದೆ. ತ್ರಿಭಂಗಿಯಲ್ಲಿ ನಿಂತಿರುವ ರಾಮನ ಆಕೃತಿಯಿದೆ. ಅಂದರೆ ಒಂದು ಕಾಲಿನ ಮೇಲೆ ಪೂರ್ಣಭಾರ ಹಾಕಿ ನಿಂತು, ಇನ್ನೊಂದು ಕಾಲಿನ ಬೆರಳಮೇಲೆ ಮಾತ್ರ ಭಾರಹಾಕಲಾಗಿದೆ. ಎಡಗಡೆಯಲ್ಲಿ ಕೆಂಪು ಬಣ್ಣದ ಸೀರೆಯುಟ್ಟ ಸೀತೆ. ಬಲಗಡೆಗೆ ನಮಸ್ಕರಿಸುತ್ತಿರುವ ಲಕ್ಷ್ಮಣನಿದ್ದಾನೆ. ಆತನ ಹಿಂದೆ ಹನುಮಂತನಿದ್ದಾನೆ. ಹನುಮನ ಮತ್ತು ರಾಮನ ಮೈಬಣ್ಣ ತಿಳಿಹಳದಿ ಇದೆ. ಕೇವಲ ರಾಮನ ಹಿಂದೆ ನಕ್ಷೆಯುಳ್ಳ ಪುಭಾವಳಿ. ಅದನ್ನು ಬಂಗಾರದ ವರ್ಣದಿಂದ ಪೂರ್ಣಗೊಳಿಸಿದೆ. ಪ್ರಭಾವಳಿಯ ಹೊರಗಿನ ಭಾಗವನ್ನು ಕಡುನೀಲಿ ವರ್ಣದ ಮಧ್ಯೆ ಅಲ್ಲಲ್ಲಿ ಛತ್ರಿ - ಚಾಮರಗಳು ಇವೆ. ಕಮಾನಿನಲ್ಲಿ ಯಥಾಪ್ರಕಾರದ ನಕ್ಷೆಗಳು. ಹಾಗೂ ಮೇಲಿನಿಂದ ತೂಗುಬಿಟ್ಟಿರುವ ಗಾಜಿನ ಬುರುಡೆಗಳಿವೆ. ಪ್ರಭಾವಳಿಯ ಕೆಳಗಡೆ ಪೀಠವಿದೆ. ಮತ್ತು ಅದರ ಕೆಳಗಡೆ ಬಿಳಿಯ ಪಟ್ಟಿಯಲ್ಲಿ ಮೂರು ತಾಟುಗಳಲ್ಲಿ ಪೂಜಾಸಾಮಗ್ರಿಗಳು, ಮಾವು, ಬಾಳೆ, ತೆಂಗು ಮುಂತಾದ ಫಲಪುಷ್ಪಗಳು ಇವೆ.

ಜನಸಾಮಾನ್ಯರಿಗೂ ಆಕರ್ಷಕವಾಗಿ ಕಾಣುವುದರ ಜೊತೆಗೆ ಯಾವ ವಿಷಯ ಕುರಿತು ಚಿತ್ರಬರೆಯಲಾಗಿದೆ ಎಂಬುದರ ಅರ್ಥವಾಗುತ್ತದೆ.

ಇಂತಹ ಅಮೂಲ್ಯ ಕೃತಿಗಳ ಮಹತ್ವವನ್ನು ತಿಳಿದುಕೊಂಡವರೂ ಇಂದಿಗೂ ಅವುಗಳನ್ನು ಜೋಪಾನವಾಗಿ ಕಾಯ್ದುಕೊಂಡು ಬಂದಿದ್ದಾರೆ. ಅಕಸ್ಮಾತ್ತಾಗಿ ಜೀರ್ಣಗೊಂಡ ಇನ್ನುಳಿದ ಕೃತಿಗಳನ್ನು ಇದ್ದ ಸ್ಥಿತಿಯಲ್ಲಿಯೇ ಕಾಯ್ದುಕೊಂಡು ಬರುವುದು ಸಂಗ್ರಹಕಾರರ ಆದ್ಯ ಕರ್ತವ್ಯವಾಗಿರುವುದು.



ಶ್ರೀರಾಮ ಪಟ್ಟಾಭಿಷೇಕ
Sri Rama Pattabhishekha



ಶ್ರೀ ವೆಂಕಟೇಶ್ವರ ಶ್ರೀದೇವಿ ಮತ್ತು ಭೂದೇವಿಯೊಂದಿಗೆ
Sri Venkateswara with Sridevi and Bhoodevi



ಶ್ರೀ ಶಾರದೆ
Sri Sharade



ದೀಪಚಂದ ಜೈನ್
Deepachand Jain



ರಂಗನಾಯಕ
Ranganayaka



ಶ್ರೀರಾಮ ದರ್ಶನ

Sri Rama Darshana



ಶ್ರೀರಾಮ ದರ್ಶನ (ವಿವರ)
Sri Rama Darshana (Details)



ಶ್ರೀರಾಮ ದರ್ಶನ (ವಿವರ)
Sri Rama Darshana (Details)



ಚೆನ್ನಬಸವ ಪುರಾಣ

Channabasava Purana (1783)




ಹಜಾರಿಮಲ ಶೇಠ ಆಂಚಲಿಯಾ
Hajarimal Shet Anchalia



ಮಾಣಿಕ ಪ್ರಭು
Manika Prabhu



ಸಮುದ್ರ ಮಂಥನ
Samudra Manthana

# Banaiah Garudadri

## The Garudadri family

History relates how kings of 10 to 15 generations ruled the Surapura province efficiently. The period of about hundred years between the reigns of Raja Immadi Venkatappa Nayaka (1773-1802) and Nalvadi Venkatappa Nayaka (1842-1858) can be described as the Golden Age of Surapura. It was during this period that the Garudadri family migrated from Andhra pradesh to Surapura. Chitivalaiah, the first of the Garudadris at Surapura, had a son named Benakaiah. It was Benkaiah's son, the first Banaiah Garudadri who was a well-known artist.

The first Banaiah had three sons: Kamalaiah, Venkaiah and Sheshaiah. Kamalaiah's son, the second Banaiah was also an artist. In the book "Sagaranaadu Darshana", it is mentioned that in 1967, he was posthumously given the president's award. The president, Dr. Babu Rajendra Prasad gave the award to Smt. Narasamma, the wife of Banaiah. Around 1972 the members of the Garudadri family left the house they were constructing, unfinished, and went to Andhra Pradesh and settled in Adoni and Hyderabad. Many of their relatives still live in Surapura and the villages nearby.

Menbers of the Garudadri family were also the supervisors and priests of the temple of Sri Venugopala Swamy, the personal

diety of the king, besides being court artists. The king had granted them about 200 acres of land at Teggalli-Shakhapura and also at Mudabula village in Shahapura taluk. Though these lands have been sold by them, they are still called the Garudadri lands.

**Banaiah Garudadri**

If visitors to Surapura see the paintings there and ask the question "who painted these?" everyone would say, "these were painted by Banaiah Garudadri." All the members of his family were artists and all of them co-operated with him when he painted. Most of the paintings done about a hundred years ago are by Baniah. Though he did not attest his name on them, there is no doubt that most of them were done by him. We also find some paintings of his son Kamalaiah with his name on them. There are some other paintings whose lines indicate that they must have been done by someone other than Banaiah.

Today we can see only a few of the numerous paintings done about a hundred years ago. We find paintings that range from 4 inches by 6 inches to imperial size. As the adage says that a wall is required to do a painting, we also find some wall-paintings.

Since he was a court-artist, many of his paintings are found in the palace. Some paintings are found on the walls of important temples, mutts and the houses of rich people in Surapura. Paintings done on paper can be seen in the houses of the Jahageerdars of the king. Some of these are of the heads of their families and their personal dieties. These are

worshipped even today. Many other paintings can be seen in other towns also where the kings' relatives live.

There is a proverb which says the tongue spoils what has been planned, and the nature spoils what has been made. Most of his paintings are in bad condition today because of the passage of time. Wall-paintings are spoiled by ignorant people and paper-paintings do not last long. Most of Banaiah's surviving paintings are in museums. There are more than eighty of his works in the British Museum alone in London. Many of his other paintings are in government Museums at Hyderabad and Delhi. Salarjung Museum at Hyderabad, Jaganmohan Palace, Mysore, and many jother important museums also have his paintings. Many paintings in private and other government museums have to be traced.

Though his numerous paintings are found in many places, they are hardly mentioned in art history, and art critics barely seem to have noticed them.

In North India Mughals encouraged art, and it has come to be known as Mughal art. Similarly, the art encouraged by the Hindu kings is known as Rajaput art. In the same way the art styles encouraged and developed in other places are known by their places. In south India also many kings encouraged art and their capitals became famous as centres of art. The most famous of these are Tanjore, Mysore, Vijayanagar, Ahmednagar, Bijapur, Hyderabad and Surapura.

An important contemporary of Garudadri, an artist himself and a British Officer, Midonsa Taylor, should be remembered here for his contribution in making Surapura a major centre of art. Besides being a very able administrator, he was also

a great researcher, novelist, Historian and artist. In the beginning he made drawings and later he got a Degree in drawings as well as colour paintings. Thus, at the time of Garudadri Surapura was an excellent centre of fine arts.

**Garudadri's works**

Many regional identities can be found in the rich traditional art treasure of Karnataka. As the influence of South India's other art styles can be seen on the art of Karnataka, we can see the influence of North India's Mughal art on the South Indian art in general.

Though the different styles of art have come under many external influences, they have retained their variety and regional identity. During a visit to the British Museum in London a well-known editor of art-books published by the Central Lalitakala Academy, famous artist and art-critic, Smt. Jaya Appaswamy was surprised to see some of the paintings there. She felt that they must be Indian and that too from Karnataka. On enquiry with the museum officials, she came to know that they were collected from the Nizam government of Hyderabad. Later, after correspondence from Delhi to Hyderabad, she came to know that they were brought from Surapura. Not satisfied with that, she persoually visited Surapura in 1975, collected detailed information about the paintings, took their pictures and returned to Delhi. It is very clear from this incident that Garudadri's paintings must have made a deep impression on Smt. Jaya Appaswamy.

Since Garudadri was a court artist, he had to paint pictures according to the wishes of the king. That is why many portraits of the Kings, Ministers, Subedars, Dewans,

and other officers of the court were painted. There are other pictures of Palegars, Dalavayis, horse - riders and hunting scenes.

Since the rulers were the devotees of Sri Venkataramana Swamy of Tirupati, many paintings of the Lord were done for the purpose of worship. Similarly, there are paintings of Krishnaleela as Sri Venugopalaswamy was the personal deity of the kings. We can also find the paintings of Shiva-Parvati, Lakshmi, Hanuman, Garuda and other gods and godesses, besides the well-known 'gods' of Sri Dattatreya, Sri Manika Prabhu and Sri Martanda Prabhu. Paintings of Sri Raghavendra Swamy can also be seen.

As quite a lot of people of the town are the devotees of Sri Venugopala Swamy and Sri Venkataramana Swamy, the pictures of these gods painted by Garudadri can be seen in quite a few houses. They are in good condition and worshipped even today. There are the paintings of Sri Rama's coronation and Sri Vaikuntha Narayana in many houses. A special feature of these paintings is that the portraits of the heads of family and the pictures of gods are composed together. A worshipper or a viewer can have a 'darshan' of the gods and the heads of family together.

In public places like temples and mutts, incidents from the Mahabharata, the Ramayana, Bhagavata and the Puranas are depicted. They show wrestlers, soldiers, cruel animals, birds, plants and trees and intricate designs. Special preparations were made for these wall-paintings as at Shravanabelagola, Lepakshi, Vijayanagar and Cibi. Mineral colours, mainly dark red and blue, are used for these works. Colours are applied flatly inside the thick outer lines.

Paintings on paper are very beautiful and of high standard. These are in traditional miniature style. There are some bigger works also in miniature style. Very few colours are used in these compositions.

Though same cololurs are used in all the pictures, we can see great skill in the composition. Thin sheets of gold used for the ornaments, sarees, blouses, turbans, shawls and the borders of other cloths, designs, prabhavali and crowns of humans and gods have enriched these paintings. These pictures with thin and delicate outer lines give the viewers an ethereal experience. The unique feature of the Indan art is to give this ethereal experience to the viewers and set them afloat in the world of imagination.

The figures of humans in these paintings slightly resemble the human figures at Lepakshi. Legs appear to be bent forward. Though the weight the body does not seem to rest on the legs, the beauty of the figures is not marred.

Though the objects chosen for paintings are familiar and can be seen in the traditional art of other places, Garudadri's paintings can be easily distinguished from them by the composition of lines and figures and also the use of gold sheets. Saffron, white and light yellow colours, prabhavalis and humans made of gold sheets, and the deep blue colour used in the background, give the pictures a touch of reality. The stars and the hanging glass lamps in the blue background and the jars, the golden plates and other such objects in the foreground are the main attractions of Garudadri's works

On the walls of Rudraswamy Mutt in 'Rangamma Pete' in Surapura, there were many paintings done by the Garudadri family. Unfortunately they were taken off about ten years ago. Since the colours had faded, they were removed and plastering was done on the walls to suit the present time. Since the common people do not realize the importance of art, such hasty and unwise things are done often. One can only conclude that things change according to times.

There is another mutt in "Rangamma pete' called Annaiah's Mutt. Even now we can see a number of paintings on the crumbling walls of this mutt. The hall of this mutt is fifteen feet by twenty feet. Paintings are done on three walls of the hall from two inches above the floor upto the cieling. Each wall has different types of picture.

There are three main compositions measuring two feet by three feet close to the roof on the wall. Two of them are related to the puranas and the third is related to the Mahabharata. Compared to the 'Samudra Manthana' and 'Girija Kalyana' based on the Puranas. 'Draupadi Swayamvara', based on the Mahabharata, is a very good work. Red, blue and yellow colours are used in a simple way like in folk-art and the lines are thick and not thin and delicate. But the space is divided so skillfully for the high level compositions that the viewers see them spell-bound. Hence they cannot be neglected as paintings done on a mere wall. From the artistic point of view, they are without doubt, extremely valuable.

Paintings on the other two walls are also very beautiful and eye-catching. There are excellent pictures of Trimurti, lovers, Kamadhanu, Keechaka's murder, a bride holding a lamp in her hands, a line of wrestlers, a monkey and other

animals and intricate designs. This fine art - treasure of the mutt is protected with love and care by the present pontiff of the mutt.

Besides these, there are many other unique paintings. These pictures were done for a book in the house of a Jangama in a village near Surapura.

After huge pictures were painted in Ajanta, painting of small pictures based on contexts for books started with the books on Jainism. Pictures drawn for books under the patronage of Mughals, other court scenes and pictures painted by Hindu artists in Rajasthan and Pahadi have been catagorized as Mughal and Rajput miniatures respectively. It was the great art-critic Dr. K. Anand Coomarswamy who named these small paintings that vary between one and eight inches as miniatures. Lines are so skillfully and delicately used in these miniatures that they look beautiful and appealing. In Karnataka also there are many miniatures based on Vachana Sahitya and painted on palm leaf.

Before printing was used, the 14th century work "Channabasava Purana" was prepared in manuscripts again and again. Some of these manuscripts contain pictures done specially for the book by Garudadri. They were done on thick hand-made Kori Paper. Experts, after examining the paper, have opined that these paintings were done around the year 1850 A.D. Garudadri must have done many other paintings for other books also.

**Description of Paintings**

There is a painting titled "Surapura Nayaka" in Sri

Jayachamarajendra Museum, Jaganmohan Palace, Mysore. It depicts Raja Nalvadi Venkatappa Nayaka (1835-1858) in conference with other kings. In the centre, the king is seated on a carpet. A British officer is seated opposite him. Behind them are seated other people of the Durbar. Their dresses resemble Kurta and Pyjamas. They have sticks and daggers. People standing behind and at the front have swords in their hands. Others, seated in the front, have musical instruments in their hands. In the front there is a carpet through the entire length of the painting. In the middle, there are some human figurers, and at the back there is a mansion with arches. This mansion reminds us of Rajasthani miniatures. The upper part shows the sky in deep blue colour.

There is another picture. It is of Sri Dattatreya which measures 4.25 feet by 6 feet. It is the trinity under an arch. The part of Shiva is in white, Vishnu is in blue and Brahma is in brownish red. The dhotara is in green and the crown is in gold. The face in the centre is of vishnu. On the right is Brahma's face and on the left Shiva's face. At the feet of Sri Dattatreya two dogs, facing each other, are depicted. The arch, like other pictures, is delicately done and the background is in deep blue.

The pictures of Sri Venkataramana Swamy are more in number and they are very attractive. On the right of Sri Venkateshwara there is the figure of Sridevi and on the left there is Bhudevi. The arch and the Prabhavali are beautiful. The background is painted in deep blue and the rest is decorated with gold plating. On the whole these paintings are very attractive and charming.

These pictures were painted for a number of people whose personal deity was Sri Venkateswara and they are worshipped even today.

The painting entitled ‘Kodanda Rama’ measures 8.5 feet by 6.75 feet. Lord Rama rests on one foot and the toe of another foot. Sita, in red saree, is on the left. Lakshman bows to Rama on the right. Hanumanta stands behind Lakshmana. Hanumanta and Rama are painted in light yellow colour. The prabhavali is behind only Rama and it is painted in gold. Beyond the prabhavali there are royal umbrellas and fans with deep blue colour in the background. The arch has the usual patterns with glass globes hanging down from above. There is a seat below the prabhavali and on a white strip are placed three plates with various things for worship and fruits like Mango, Banana and Coconut.

## Epilogue

A critical examination of the works of Garudadri and other traditional works shows that Garudadri’s works have their own unique place. The art of Karnataka has its own distinct style and place in the tradition of Indian art. Though the technique and subjects chosen for painting are the same all over India, the paintings of Karnataka can be easily seperated from the rest because of the difference in colour combination and the design of lines. The paintings of Garudadri can be easily distinguished from the traditional paintings of Mysore, Vijayanagar paintings, art encouraged by the Adil Shahi Kingdom of Bijapur, other paintings by Surapura artists and the painting of

the rest of India. Similarly the Surapura paintings can be distinguished from the other paintings of Karnataka by their unique beauty, charm, style and skill. All these paintings were done by only one family-the Garudadri family. All the family members joined together to do a painting. Though Banaiah Garudadri's works are of the highest quality, every member of the family worksed for the Surapura style of paintings.

Traditional art does not always mean mere repitition. They are often done with special skill and distinction. Many arts and crafts were limited to one family. They were handed down from one generation to another. Every member of the family worked for the art or craft it practised. As all the members of the family and its relatives carried on only one profession, it was possible to produce more works. They also became experts. Even now there are examples of a single talented artist producing plenty of works with the help of others. Such an artist gives initial guidance to others and gets the work done by them. After that he gives the finishing touches to it and thus completes it. Thus the credit for the painting under whose guidance it is done, goes to him and not to those who assist him. Similarly though all the members of the Garudadri family helped him in his work, the credit goes only to Banaiah. Today in Surapura people remember and talk only about Banaiah and not the other members of his family.

More attempts are being made these days to understand the style and technique of Garudadri. His works have inspired a number of artists. But tastes differ from

person to person. Some, who like creativity and intellect, appreciate Modern Art; and some others find traditional art attractive. The delicate lines, the use of gold sheets, designs and the beauty of intricate patterns in traditional art are not only attractive to but understood and appreciated by the common people.

Those who have realized the importance of such rare works have protected them. It is the primary duty of art collectors to preserve the remaing works in whatever condition they are.

## ಅಕಾಡೆಮಿಯ ಹೊಸ ಪ್ರಕಟಣೆಗಳು

- ಕಲಾಕೋಶ
- ಚಿತ್ರಕಲಾ ದರ್ಪಣ
- ಛಾಯಾಚಿತ್ರಣ
- ಮಧ್ಯಪ್ರದೇಶದ ಕಲೆ
- ಕರ್ನಾಟಕ ಪ್ರಾಗಿತಿಹಾಸದ ಕಲೆ
- ಟಿ. ಪಿ. ಅಕ್ಕಿ
- ಪಿ. ಆರ್ ತಿಪ್ಪೇಸ್ವಾಮಿ
- ಮುರುಗೋಡು ಹಿರಣ್ಣಪ್ಪ
- ಎಸ್. ನಂಜುಂಡಸ್ವಾಮಿ
- ಎಂ. ಜೆ. ಶುದ್ಧೋಧನ
- ಡಾ. ಸ್ವೆಟಾಸ್ಲೊವ್ ರೋರಿಕ್
- ಜಿ. ಎಸ್. ಶೆಣೈ
- ಗಂಜೀಫಾ ಕಲೆ